ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

| ಸಂಪುಟ: ೦೨ ಸಂಚಿಕೆ: ೧೨ | ಮಾರ್ಚ್ ೨೦೧೬ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 02 Issue 12 | March 2016 | Pages - 8 | A. Sub. - Rs. 20/- | Editor : Sri. B.R. Ravindranath |





**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/–**
**ಐದು ವರ್ಷಗಳ ಚಂದಾ**
**ರೂ. ೧೦೦/–**



ವಿಳಾಸ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
**ಸ್ಥಾಪನೆ : ೦೬–೦೫–೧೯೭೯**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com


## ಗಮಕ ವಾಹಿನಿ ಕಾರ್ಯಕ್ರಮ ಮಾಲೆಯ ಉದ್ಘಾಟನೆ

03–02–2016 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ನೂತನ ಕಾರ್ಯಕ್ರಮವಾದ ಗಮಕ ವಾಹಿನಿ ಕಾರ್ಯಕ್ರಮ ಮಾಲೆಯನ್ನು ಶ್ರೀಮತಿ ಗಂಗಮ್ಮ ಕೇಶವಮೂರ್ತಿ, ಅಧ್ಯಕ್ಷರು, ಕರ್ನಾಟಕ ಸಂಗೀತ ನೃತ್ಯ ಕಲಾ ಅಕಾಡೆಮಿ ಅವರು ಉದ್ಘಾಟಿಸಿದರು. ಗಮಕ ಕಲೆಯನ್ನು ಪ್ರೋತ್ಸಾಹಿಸಲು ತಮ್ಮ ಅಕಾಡೆಮಿಯಿಂದ ಸಹಾಯ ಪಡೆಯಬಹುದು ಎಂದು ತಿಳಿಸಿದರು. ಸ್ವತಃ ಗಮಕ ಕಲಾವಿದೆಯಾದ ಅವರು ಜೈಮಿನಿ ಭಾರತದ ಒಂದು ಪ್ರಸಂಗವನ್ನು ಗಮಕ ರೂಪದಲ್ಲಿ ಹಾಡಿ ತೋರಿಸಿದರು.

ಗೌರವ ಕಾರ್ಯದರ್ಶಿ ಫ್ರೊ.ಅಬ್ದುಲ್ ಬಶೀರ್ ಅವರು ಸ್ವಾಗತಿಸಿದರು. ಡಾ. ಪಿ.ವಿ. ನಾರಾಯಣ ಅವರು ಕಾರ್ಯಕ್ರಮ ಮಾಲೆಯ ಹಿನ್ನಲೆ ಹಾಗೂ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿದರು. ಪ್ರಸಿದ್ಧ ಗಮಕಿ ಪ್ರೊ.ಎಂ.ಆರ್. ಸತ್ಯನಾರಾಯಣ, ಶ್ರೀ ಕೆ.ವಿ.ಆರ್.ಟ್ಯಾಗೂರ್ ಅವರು ಉಪಸ್ಥಿತರಿದ್ದರು. ಗಮಕ ವಾಹಿನಿ ಕಾರ್ಯಕ್ರಮ ಮಾಲೆಯನ್ನು ನಡೆಸಿಕೊಡುವ ಶ್ರೀಮತಿ ಸಿ.ವಿ. ಶ್ರೀಮತಿ ಅವರ ನೇತೃತ್ವದಲ್ಲಿ ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ವಿದ್ಯಾರ್ಥಿಗಳಾದ ಪದ್ಮಿನಿ, ನಾಗರಂಜನಿ, ಸಹನ, ಅಭಿರಾಮ್, ಭರತವಂಶಿ, ರಾಹುಲ್ ನಿರಂಜನ್, ದೀಪಕ್ ವಿ.ಕಶ್ಯಪ್ ಅವರುಗಳು ಗಮಕ ರೂಪಕ "ದೂರ್ವಾಸಾತಿಥ್ಯ" ಕುಮಾರವ್ಯಾಸ ಭಾರತ ಪ್ರಸಂಗವನ್ನು ನಡೆಸಿಕೊಟ್ಟರು.



## ಸಂಪಾದಕೀಯ

ಫೆಬ್ರವರಿ 2016ರಲ್ಲಿನ ಕೆಲವು ಬೆಳವಣಿಗೆಗಳು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳಿಗೆ ಪ್ರೋತ್ಸಾಹ ದಾಯಕವಾಗಿರುವುದು ನಮಗೆಲ್ಲ ಸಂತಸ ತಂದಿರುತ್ತದೆ.

ಮೊದಲಿಗೆ ಡಾ. ಪಿ.ವಿ. ನಾರಾಯಣ ಅವರು 26–02–2019ರ ವರೆಗೆ ಬಿ.ಎಂ. ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾಗಿ ಮುಂದುವರೆಯಲು ಒಪ್ಪಿಕೊಂಡಿರುವುದು ಒಂದು ಹೆಮ್ಮೆಯ ವಿಚಾರವಾಗಿರುತ್ತದೆ.

ಬಿ.ಎಂ. ಶ್ರೀ ಪ್ರತಿಷ್ಠಾನಕ್ಕೆ ನೀಡುತ್ತಿದ್ದ ಅನುದಾನ ಮೊತ್ತದಲ್ಲಿ ಕರ್ನಾಟಕ ಸರ್ಕಾರವು ಕಳೆದ ವರ್ಷ ಅರ್ಧದಷ್ಟು ಕಡಿತಗೊಳಿಸಿತ್ತು. ಈ ವರ್ಷ ಅಂದರೆ 2015–16ನೇ ಸಾಲಿನಲ್ಲಿ ರೂ ಹತ್ತು ಲಕ್ಷ ಮೊತ್ತದ ಅನುದಾನ ಲಭ್ಯವಾಗಿರುತ್ತದೆ.ಈ ಮೊತ್ತದಿಂದ ಬಿ.ಎಂ.ಶ್ರೀ ಪ್ರತಿಷ್ಠಾನವು ವಾಡಿಕೆಯಾಗಿ ನಡೆಸಿಕೊಂಡುಬರುತ್ತಿರುವ ಚಟುವಟಿಕೆಗಳನ್ನು ನಡೆಸಲು ಸಾಧ್ಯವಾಗುತ್ತದೆ. ಆದರೆ ಬಿ.ಎಂ.ಶ್ರೀ ಪ್ರತಿಷ್ಠಾನವು ಹಮ್ಮಿಕೊಂಡಿರುವ ಇತರ ಯೋಜನೆಗಳ ವೆಚ್ಚಗಳನ್ನು ಭರಿಸಲು ಹಲವು ವಿಧಗಳಲ್ಲಿ ಪ್ರಯತ್ನಿಸುತ್ತಿದ್ದು ಕೆಲವು ನೂತನ ಚಟುವಟಿಕೆಗಳನ್ನು ಸದ್ಯದಲ್ಲಿಯೇ ಆರಂಭಿಸಲಾಗುತ್ತದೆ. ಬಿ.ಎಂ. ಶ್ರೀ ಪ್ರತಿಷ್ಠಾದ ಸದಸ್ಯರು ಹಾಗೂ ಸಾಹಿತ್ಯಾಸಕ್ತರು ಈಗಿನಂತೆ ಮುಂದೆಯೂ ನಮ್ಮನ್ನು ಪ್ರೋತ್ಸಾಹಿಸಿದಲ್ಲಿ ಯಶಸ್ಸುಗಳನ್ನು ಕಾಣುವುದು ನಿಶ್ಚಿತ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರತಿಷ್ಠಿತ ವಿದ್ವತ್ ಪತ್ರಿಕೆ ಲೋಚನಾಗೆ ಹೊಸ ಸಂಪಾದಕರಾಗಿ ಡಾ. ಹೆಚ್. ಎನ್. ಮುರಳೀಧರ್ ಅವರು ನೇಮಕಗೊಂಡಿರುತ್ತಾರೆ. ಅವರಿಗೆ ನಮ್ಮೆಲ್ಲರ ಅಭಿನಂದನೆಗಳು.

ಎಲ್ಲಾ ಓದುಗರೂ ಹೊಂಗನಸು ಪತ್ರಿಕೆಯ ಚಂದಾದಾರರಾಗಬೇಕೆಂದು ನಮ್ಮ ಆಶಯವಾಗಿದೆ.ಈಗಾಗಲೇ ಅರ್ಧಕ್ಕೂ ಹೆಚ್ಚು ಸದಸ್ಯರು ಚಂದಾದಾರರಾಗಿರುತ್ತರೆ. ಉಳಿದವರೂ ಆದಷ್ಟೂ ಬೇಗನೆ ಚಂದಾದಾರರಾಗಬೇಕೆಂದು ಕೋರುತ್ತೇವೆ.

**ಬಿಆರ್ ರವೀಂದ್ರನಾಥ್**
ಸಂಪಾದಕರು

## ಶ್ರದ್ಧಾಂಜಲಿ

### ಡಾ॥ ಸಾ.ಶಿ. ಮರುಳಯ್ಯ

28–01–1931 04–02–2016



ಹಿರಿಯ ಸಾಹಿತಿ ಡಾ. ಸಾ.ಶಿ. ಮರುಳಯ್ಯ ಅವರು ವಿಧಿವಶರಾಗಿದ್ದಾರೆ. ಅವರಿಗೆ 85 ವರ್ಷಗಳಾಗಿತ್ತು. ಅವರ ಇಚ್ಛೆಯಂತೆ ಮೈಸೂರಿನ ಜೆಎಸ್‌ಎಸ್ ಆಸ್ಪತ್ರೆಗೆ ದೇಹವನ್ನು ದಾನ ಮಾಡಲಾಯಿತು. 1931ರ ಜನವರಿ 28ರಂದು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲೂಕಿನ ಸಾಸಲು ಗ್ರಾಮದಲ್ಲಿ ಜನಿಸಿದ್ದ, ಸಾಸಲು ಶಿವರುದ್ರಯ್ಯ ಮರುಳಯ್ಯ ಅವರು ಪ್ರಾಧ್ಯಾಪಕರಾಗಿ ಬೆಂಗಳೂರು, ಮೈಸೂರು, ಮಂಗಳೂರು ಸೇರಿದಂತೆ ವಿವಿಧ ಕಡೆ ಸುದೀರ್ಘ ಸೇವೆ ಸಲ್ಲಿಸಿದ್ದರು. ಡಾ.ಸಾ.ಶಿ.ಮರುಳಯ್ಯ ಅವರು ಕಾವ್ಯ, ಪ್ರಹಸನ, ಕಾದಂಬರಿ, ಸಣ್ಣಕಥೆ, ನಾಟಕ, ವಿಮರ್ಶೆ ಸೇರಿದಂತೆ 60ಕ್ಕೂ ಅಧಿಕ ಕೃತಿಗಳನ್ನು ರಚನೆ ಮಾಡಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದಿಂದ 'ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ' ಕುರಿತ ಮಹಾ ಪ್ರಬಂಧಕ್ಕೆ ಪಿಎಚ್‌ಡಿ ಪದವಿ ಪಡೆದಿದ್ದಾರೆ. ಪ್ರಮುಖ ಕೃತಿಗಳು : ಶಿವತಾಂಡವ, ಕೆಂಗನಕಲ್ಲು, ರೂಪಸಿ ಮುಂತಾದ ಕವನ ಸಂಕಲನ, ನೆಲದ ಸೊಗಡು, ಹೇಮಕೂಟ ಕಥಾ ಸಂಕಲನ, ಮರೀಬೇಡಿ, ವಿಜಯವಾತಪಿ ನಾಟಕ, ಭಾರತ ರತ್ನ ನೆಹರು, ದೇವುಡು ಜೀವನ ಚರಿತ್ರೆ ಸಾ.ಶಿ.ಮರುಳಯ್ಯ ಅವರ ಪ್ರಮುಖ ಕೃತಿಗಳು.

1995ರಿಂದ 1998ರವರೆಗೆ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ರಾಜ್ಯ ಭಾಷಾ ಆಯೋಗದ ಸದಸ್ಯರಾಗಿಯೂ ಅವರು ಸೇವೆ ಸಲ್ಲಿಸಿದ್ದರು.

**ಮಾರ್ಚ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು**

| | |
|---|---|
| ಎಂ. ಗೋವಿಂದಪೈ | 23–03–1883 |
| ಡಿವಿಜಿ | 17–03–1887 |
| ಮುಳಿಯ ತಿಮ್ಮಪ್ಪಯ್ಯ | 03–03–1888 |
| ಪುತಿನ | 17–03–1905 |
| ಪಿ.ಲಂಕೇಶ | 08–03–1935 |

**ಮಾರ್ಚ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು**

| | |
|---|---|
| ಸಿಂಪಿ ಲಿಂಗಣ್ಣ | 05–03–1993 |
| ಪುತಿನ | 23–10–1998 |
| ಜಿ ಪಿ ರಾಜರತ್ನಂ | 13–03–1979 |
| ನಿರಂಜನ | 13–03–1991 |
| ಶಾಂತಿನಾಥ ದೇಸಾಯಿ | 26–03–1998 |

# ಮಾರ್ಚ್ 2016ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು



**02–03–2016 – ಬುಧವಾರ ಸಂಜೆ 6 ಗಂಟೆ**

**ಗಮಕ ವಾಹಿನಿ ಕಾರ್ಯಕ್ರಮ ಮಾಲೆ**

**ಗಮಕ ರೂಪಕ: ಜೈಮಿನಿ ಭಾರತದ "ಮಯೂರ ಧ್ವಜ ವೃತ್ತಾಂತ"**

ನಡೆಸಿ ಕೊಡುವವರು : ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ

ಭಾಗವಹಿಸುವವರು : ಶಾರ್ವರಿ ಸಿ.ವಿ. ವರ್ಣಿಕ, ರಂಜನಿ, ಅನನ್ಯ, ಪ್ರಾರ್ಥನಾ ಮಧುಸೂದನ, ಪ್ರೇರಣಾ ಮಧುಸೂದನ

ನೇತೃತ್ವ : ಶ್ರೀಮತಿ ಸಿ.ವಿ. ಶ್ರೀಮತಿ



**08–03–2016 ಮಂಗಳವಾರ ಸಂಜೆ 6 ಗಂಟೆ**

**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ**

ಸಾಕ್ಷ್ಯ ಚಿತ್ರಗಳ ಪ್ರದರ್ಶನ

1) ಹೊಸಗನ್ನಡ 2) ಗುಲಬರ್ಗಾ ಕನ್ನಡ

**15–03–2016 ಮಂಗಳವಾರ ಸಂಜೆ 6 ಗಂಟೆ**

**ಅಕ್ಕರಗೊಟ್ಟಿ**

ವಿಷಯ : **"ಜೋಗುಳ(ಲಾಲಿಗಳು)"–** ಒಂದು ವೈಜ್ಞಾನಿಕ ವಿಶ್ಲೇಷಣೆ

ಡಾ.ಹರಿಹರ ಶ್ರೀನಿವಾಸರಾವ್

ಜಲತಂತ್ರಜ್ಞಾನ ತಜ್ಞರು(ನಿವೃತ್ತ) ಬೆಂಗಳೂರು

**16–03–2016 ಬುಧವಾರ ಸಂಜೆ 6 ಗಂಟೆ**

**ಶ್ರೀಮತಿ ರಂಗನಾಯಕಮ್ಮ–ಕೆ.ಜಿ. ಸುಬ್ಬರಾವ್ ದತ್ತಿ**

ಶ್ರೀಮತಿ ವತ್ಸಲಾ ರಾವ್ ತಂಡದವರಿಂದ

ದೇವರನಾಮಗಳು ಮತ್ತು ಪ್ರಬಂಧ ಸ್ಪರ್ಧೆ ವಿಜೇತರಿಗೆ ಬಹುಮಾನ ವಿತರಣೆ

**21–03–2016 ಸೋಮವಾರ ಸಂಜೆ 6 ಗಂಟೆ**



**ವಚನವಿಹಾರ** – ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ



**24–03–2016 ಗುರುವಾರ ಸಂಜೆ 6 ಗಂಟೆ**

**ಸೋಸಲೆ ಅಯ್ಯಾಶಾಸ್ತ್ರಿ, ಶಂಬಾ ಜೋಷಿ ಎಂ.ಜಿ. ನಂಜುಂಡಾರಾಧ್ಯ ದತ್ತಿ ಕಾರ್ಯಕ್ರಮ**

ಉಪನ್ಯಾಸ :ಡಾ. ಕರಿಗೌಡ ಬೀಚನಹಳ್ಳಿ

ಎಮರಿಟಸ್ ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿಷಯ :ಕನ್ನಡ ಭಾಷೆಯ ಪ್ರಾಚೀನತೆ

## ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

**–ಡಾ.ಪಿ.ವಿ, ನಾರಾಯಣ**

ಎಕ್ಕ: ಇದೊಂದು ಸಂಖ್ಯಾವಾಚಕ, ಒಂದನ್ನು ಸೂಚಿಸುವುದು. 'ಕರ್ನಾಟಕ ಶಬ್ದಸಾರ'ವೆಂಬ ಸು.ಕ್ರಿಶ. 1400 ನಿಘಂಟುವಿನಲ್ಲಿ "ಎಕ್ಕಮೆಂದುಂ ಓರೆಂದುಂ ಒಂದು" ಎಂದು ಹೇಳಿದೆ.ಇದು ಸಂಸ್ಕೃತದ ಏಕ ಎಂಬ ಶಬ್ದದ ತದ್ಭವ ಎಂಬುದು ಸ್ಪಷ್ಟವಾಗಿಯೇ ಇದೆ.ಬರಿಯ ಸಂಖ್ಯೆಯನ್ನಲ್ಲದೆ ಒಂದನ್ನು ಹೊಂದಿರುವುದನ್ನು 'ಎಕ್ಕ' ಎಂದು ಕರೆಯುವುದೂ ರೂಢಿಯಾಯಿತು. ಒಂಟಿ ಪ್ರಾಣಿಯನ್ನು ಕಟ್ಟಿದ ಗಾಡಿಯನ್ನೂ 'ಎಕ್ಕ' ಎಂದು ಕರೆಯುತ್ತಿದ್ದರು. ಈಚೆಗೆ ಇಸ್ಪೀಟು ಆಟದಲ್ಲಿ, ಯಾವುದೇ ಚಿತ್ರವಿರುವ ಎಲೆಯಾಗಲೀ ಒಂದು ಇದ್ದರೆ ಅದನ್ನು 'ಎಕ್ಕ' ಎಂದು ಕರೆಯುವುದನ್ನು ನಾವೆಲ್ಲ ಬಲ್ಲೆವು.

ಈ ಶಬ್ದದಿಂದ ಒಂದನ್ನು ಸೂಚಿಸುವ ಸಮಾಸಶಬ್ದಗಳನ್ನೂ ನಿರ್ಮಿಸಿಕೊಳ್ಳುವ ಪರಿಪಾಟ ಹಿಂದಿನಿಂದಲೂ ಬಂದಿದೆ. ಹಳಗನ್ನಡ ಕಾವ್ಯಗಳಲ್ಲಿ ಒಂದೆಳೆ ಸರ ಎಂಬರ್ಥದಲ್ಲಿ 'ಎಕ್ಕಸರ' ಎಂದೂ, 'ಏಕಾವಳಿ' ಎಂಬುದರ ತದ್ಭವವಾಗಿ 'ಎಕ್ಕಾವಳೀ' ಎಂದೂ ಬಳಸಲಾಗಿದೆ. 'ಎಕ್ಕಸರ'ವನ್ನು ಒಂದೇ ಸಮನೆ ಅಥವಾ ನಿರಂತರವಾಗಿ ಎಂಬರ್ಥದಲ್ಲಿ 'ಏಕಸ್ವರ' ಎಂಬುದರ ತದ್ಭವವಾಗಿಯೂ, ಒಂದೇ ಬಾಣ ಎಂಬ ಅರ್ಥ ನೀಡುವ 'ಏಕಶರ' ಎಂಬುದರ ತದ್ಭವರೂಪದಲ್ಲಿಯೂ ಬಳಸಿರುವುದು ಕಂಡುಬರುತ್ತದೆ.

'ಎಕ್ಕ' ಶಬ್ದದಿಂದ 'ಎಕ್ಕಟಿ' ಎಂಬುದು ಬಂದಿದೆ.ಇದರ ಅರ್ಥ ಒಬ್ಬನೇ ಅಥವಾ ಒಂಟಿ ಎಂದು.'ಎಕ್ಕಟಿಗಾಳೆಗ' ಎಂದರೆ ಒಬ್ಬ ಒಬ್ಬನೊಡನೆ ಮಾಡುವ ಯುದ್ಧ ಅಥವಾ ದ್ವಂದ್ವಯುದ್ಧ ಎಂಬರ್ಥವಿದೆ.ಇನ್ನೂ ಮುಂದುವರಿದು 'ಎಕ್ಕಟಿ' ಶಬ್ದವನ್ನು ಏಕಾಂತ ಎಂಬ ಅರ್ಥದಲ್ಲೂ ಬಳಸುವ ರೂಢಿಯಿತ್ತು.ಏಕಾಂತದ ಜಾಗಕ್ಕೆ ಕರೆ ಎಂಬರ್ಥದಲ್ಲಿ 'ಎಕ್ಕಟಿಕರೆ' ಅಥವಾ 'ಎಕ್ಕಟಿಗರೆ' ಎಂಬ ರೂಪದ ಬಳಕೆಯೂ ಇದೆ.ಒಬ್ಬನೊಂದಿಗಿನ ಸಮಾನ ಯೋಗ್ಯತೆ ಎಂಬರ್ಥದಲ್ಲಿ 'ಎಕ್ಕತಕ್ಕು' ಎಂಬ ಶಬ್ದ ಸಿಕ್ಕುತ್ತದೆ.ಚಪ್ಪಲಿ ಎಂಬರ್ಥದಲ್ಲಿ ಎಕ್ಕಡ ಎಂಬ ಶಬ್ದವನ್ನು ನಾವೀಗ ಬಳಸುತ್ತೇವಲ್ಲ, ಅದು ಹಳಗನ್ನಡದಲ್ಲಿ 'ಎಕ್ಕವಡ' ಎಂಬ ರೂಪದಲ್ಲಿತ್ತು. ಇದು ಒಂದೇ ಹಾಳೆ ಎಂಬರ್ಥದ 'ಏಕಪಟ' ಎಂಬುದರ ತದ್ಭವವಾಗಿರಬಹುದೇ? ಒಂದೇ ಬಟ್ಟೆ ಎಂಬರ್ಥದಲ್ಲಿಯೂ ಈ ಶಬ್ದ ಬಳಕೆಯಾಗಿದೆ.'ಎಕ್ಕ'ದಿಂದಲೇ 'ಎಕ್ಕಲ' ಎಂಬ ಶಬ್ದವೂ ರೂಪಿತವಾಗಿದೆ.ಎಕ್ಕಲ ಎಂಬುದನ್ನು ಹಳಗನ್ನಡದಲ್ಲಿ ಮುಳ್ಳುಹಂದಿ ಎಂಬರ್ಥದಲ್ಲಿ ಬಳಸಲಾಗಿದೆ. 'ಒಂಟಿ'ಯಾಗಿ ಸುಳಿಯುವ ಪ್ರಾಣಿ (ಸಲಗ ಅಥವಾ ಹಂದಿ) ಎಂಬರ್ಥದಲ್ಲಿ ಈ ಪದವನ್ನು ಬಳಸಿರಬಹುದು. 'ಎಕ್ಕಲಗಾಣ' ಎಂಬುದು ಒಂಟಿ ಹಾಡುಗಾರನನ್ನು ಸೂಚಿಸಲು, 'ಎಕ್ಕಲವೀರ' ಎಂಬುದು ಏಕಾಂಗವೀರ ಎಂಬರ್ಥದಲ್ಲಿ ಬಳಕೆಗೊಂಡಿದೆ.

## ಆಧುನಿಕ ವಚನಗಳು

**–ಜಿ. ಅಬ್ದುಲ್ ಬಷೀರ್**

ಹೆಣ್ಣಿನುದ್ಧಾರದ ಹೆಸರಿನಲ್ಲಿ ಓಟು ಕೇಳುವರು
ಧರ್ಮದುದ್ಧಾರದ ಹೆಸರಿನಲ್ಲಿ ಓಟು ಕೇಳುವರು
ಬಡತನದುದ್ಧಾರದ ಹೆಸರನಲ್ಲಿ ಓಟು ಕೇಳುವರು
ಚುನಾವಣೆ ಮುಗಿದು ಫಲಿತಾಂಶ ಬಂದು ಮೇಲೆ
ನೀಟಾಗಿ ಕಾರು ಹತ್ತವರು
ಭೂಮಿಯ ಮೇಲೆ ನಡೆದಾಡುವ ಇವರು
ಅಸಂಖ್ಯಾತ 'ಕಾರು–ಬಾರು'ಗಳಲ್ಲಿ ತೊಡಗುವವರು
ಐದು ವರ್ಷಗಳಾದರೂ ಸ್ವಕ್ಷೇತ್ರಕ್ಕೆ ಬಾರದವರು
ಓಟು ಕೊಟ್ಟವರೊಗೆ ಏಟು ಹಾಕಿ
ತಮ್ಮ ತೀಟೆ ತೀರಿಸಿಕೊಳ್ಳುವವರನೆಂತು ನಂಬುವನು
"ಅಲ್ಲಾರಖಾ". ॥4॥

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ತಿಮ್ಮಪ್ಪದಾಸ ಪ್ರಾಚೀನ ಹಸ್ತಪ್ರತಿ ಸಂಗ್ರಹಾಲಯಕ್ಕೆ ಎಂ.ಇ. ಎಸ್. ಪದವಿ ಕಾಲೇಜು ವಿದ್ಯಾರ್ಥಿಗಳ ಭೇಟಿ

ಇಪ್ಪತ್ತೇಳು ವಿದ್ಯಾರ್ಥಿಗಳ ತಂಡವು, ಮಲ್ಲೇಶ್ವರಂ ಎಂ.ಇ.ಎಸ್ ಪದವಿ ಕಾಲೇಜಿನಿಂದ ನಮ್ಮ ಹಸ್ತಪ್ರತಿ ಸಂಗ್ರಹಾಲಯಕ್ಕೆ ದಿನಾಂಕ 12–02–2016ರಂದು ಭೇಟಿನೀಡಿ, ಹಸ್ತಪ್ರತಿ ಶಾಸ್ತ್ರದ ವಿವಿಧ ಆಯಾಮಗಳ ಬಗ್ಗೆ ಪರಿಚಯ ಮಾಡಿಕೊಂಡರು.ಆಧುನಿಕ ತಂತ್ರಜ್ಞಾನದ ಡಿಜಿಟಲೈಜೇಷನ್, ಇಮೇಜಿಂಗ್, ಕ್ರಾಪಿಂಗ್‌ಗಳ ಬಗ್ಗೆಯೂ ನಮ್ಮ ನಿರ್ದೇಶಕರಾದ ಪ್ರೊ.ಎಚ್.ಶೇಷಗಿರಿರಾವ್‌ರವರು ಗಣಕಯಂತ್ರದ ಸಹಾಯದಿಂದ ಪ್ರಾತ್ಯಕ್ಷಿಕೆ ನೀಡಿದರು.

ಡಾ॥ ಪಿ.ವಿ. ನಾರಾಯಣರವರು ವಿದ್ಯಾರ್ಥಿಗಳನ್ನು ಸ್ವಾಗತಿಸಿ ತಾಳೆಗರಿಗಳ ಉಗಮ,ಹದಮಾಡುವ ವಿಧಾನ, ಕೊರೆಯುವ ರೀತಿ, ಪ್ರಾಚೀನ ಸಂರಕ್ಷಣಾ ವಿಧಾನ, ಇವುಗಳ ಬಗ್ಗೆ ಮಾಹಿತಿ ನೀಡಿದರು.ಡಾ॥ ಲೋಕೇಶ್ವರಪ್ಪ, ಕೆ.ಬಿ, ಕನ್ನಡ ವಿಭಾಗದ ಮುಖ್ಯಸ್ಥರು , ಶ್ರೀಮತಿ ಎ.ಎನ್. ಭಾಗ್ಯ, ಶ್ರೀಮತಿ ಜಿ. ಭಾಗ್ಯಮ್ಮ, ಶ್ರೀಮತಿ ಜಿ.ಬಿ. ಮಹೇಶ್ವರಿ ಮತ್ತು ಎಚ್.ಕೆ.ಲೋಕೇಶ್ ಅಧ್ಯಾಪಕರು ವಿದ್ಯಾರ್ಥಿಗಳ ಭೇಟಿಯನ್ನು ಆಯೋಜಿಸಿದ್ದರು.

## ವಚನ ವಿಹಾರ

## ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

17–2–2016 ವಚನ ವಿಹಾರ ಸಾಕ್ಷ್ಯ ಚಿತ್ರಗಳಲ್ಲಿ ಅಕ್ಕ ಮಹಾದೇವಿಯ ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು. ಸುಮಾರು ಒಂದು ಗಂಟೆಯ ಈ ಸಂಗೀತಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಳೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜನವರಿ 2016–ಫೆಬ್ರವರಿ 2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

**23–01–2016 ರಂದು ದಿ॥ ಬಿ.ಎಸ್. ಗೋಪಾಲ ರಾವ್ ಮತ್ತು ಶ್ರೀಮತಿ ವೇದವತಿಬಾಯಿ ದತ್ತಿ ಕಾರ್ಯಕ್ರಮದ** ಅಡಿಯಲ್ಲಿ ಶ್ರೀಮತಿ ಸತ್ಯಲಕ್ಷ್ಮಿ ಹಾಗೂ ಶ್ರೀಮತಿ ರತ್ನಮೂರ್ತಿ ಅವರು ಗಮಕ ವಾಚನ– ವ್ಯಾಖ್ಯಾನ ನಡೆಸಿಕೊಟ್ಟರು




**24–01–2016ರಂದು ಮೋಹನ್‌ದೇವ ಆಳ್ವಾ– ಡಾ. ಎಂ.ಕೆ. ಶೈಲಜಾ ದತ್ತಿಕಾರ್ಯಕ್ರಮ**



ದಿನಾಂಕ 24ಜನವರಿ 2016ರಂದು ಶ್ರೀ ಮೋಹನ್ ದೇವ್ ಆಳ್ವ ಮತ್ತು ಡಾ॥ಎಂ.ಕೆ.ಶೈಲಜಾ ದತ್ತಿಯಡಿಯಲ್ಲಿ ಚೊಚ್ಚಲ ಕಾರ್ಯಕ್ರಮವಾಗಿ 25ವರ್ಷಕ್ಕಿಂತ ಕಡಿಮೆ ವಯಸ್ಸಿನ ವಿದ್ಯಾರ್ಥಿಗಳಿಗಾಗಿ ಹಿಂದೂಸ್ತಾನಿ ಗಾಯನ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು.ಪ್ರೌಢಾಶಾಲಾ ಮತ್ತು ಪದವಿ ವಿದ್ಯಾರ್ಥಿಗಳು ಭಾಗವಹಿಸಿದ್ದರು.ಬಡಾಖ್ಯಾಲ್ ಮತ್ತು ಛೋಟಾ ಖ್ಯಾಲ್‌ಗಳನ್ನೊಳಗೊಂಡಂತೆ, ಪ್ರತೀ ಸ್ಪರ್ಧಿಗೂ 20 ನಿಮಿಷಗಳ ಕಾಲಾವಕಾಶ ನೀಡಲಾಗಿತ್ತು.

ವಿಜಯಾ ಕಾಲೇಜಿನ ಎರಡನೇ ಬಿ.ಕಾಂ. ವಿದ್ಯಾರ್ಥಿನಿ ಕುಮಾರಿ ಕವನಾ.ಎಲ್. ಹೆಗಡೆ, ಗಾವತಿ ರಾಗದಲ್ಲಿ ಸುಶ್ರಾವ್ಯವಾಗಿ ಹಾಡಿ ಮೊದಲ ಸ್ಥಾನವನ್ನು ಪಡೆದರು.11 ವರ್ಷ ವಯಸ್ಸಿನ ಪ್ರತೀಕ್ಷಾಭಟ್, ಕಾರ್ಮೆಲ್ ಕಾನ್ವೆಂಟಿನ ವಿದ್ಯಾರ್ಥಿನಿ, ಬಸಂತ್ ರಾಗದಲ್ಲಿ ಹಾಡಿ, ಎರಡನೇ ಸ್ಥಾನವನ್ನು ಪಡೆದರು.

ತೀರ್ಪುಗಾರರಾಗಿ ಶ್ರೀಮತಿ ನೇತ್ರಾ ಶೇಷಾದ್ರಿ (ಪಂಡಿತ್ ಶ್ರೀ ಪರಮೇಶ್ವರ್ ಹೆಗಡೆಯವರ ಶಿಷ್ಯೆ) ಮತ್ತು ಶ್ರೀಮತಿ ನಿರ್ಮಲ ಬಳವಳ್ಳಿ( ಪಂಡಿತ ಶ್ರೀ ವಿನಾಯಕ ತೊರವಿಯವರ ಶಿಷ್ಯೆ) ಆಗಮಿಸಿದ್ದರು.

**28–01–2016 ರಂದು ಕಣಕಟ್ಟೆ ಕೃಷ್ಣಮೂರ್ತಿ ರಾವ್ ದತ್ತಿ ಕಾರ್ಯಕ್ರಮದ** ಅಡಿಯಲ್ಲಿ ಶ್ರೀಮತಿ ಸುಷ್ಮಾಸಂತೋಷ್ ಅವರು ಕರ್ನಾಟಕ ಶಾಸ್ತ್ರೀಯ ಗಾಯನ ಕಚೇರಿಯನ್ನು ನಡೆಸಿಕೊಟ್ಟರು



**30–01–2016 ಪುಸ್ತಕದಾನ ಕಾರ್ಯಕ್ರಮ**



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಅಕ್ಷಯಪಾತ್ರಾ ಫೌಂಡೇಷನ್ ಸಹಯೋಗದಲ್ಲಿ ವಾರ್ಷಿಕ ವಾಗಿ ನಡೆಸುವ ಪುಸ್ತಕದಾನ ಕಾರ್ಯಕ್ರಮವನ್ನು ಅಶೋಕನಗರದ ಬಿಬಿಎಂಪಿ ಶಾಲೆಯಲ್ಲಿ ದಿನಾಂಕ 30 ನೇ ಜನವರಿ 2016 ರಂದು ನಡೆಸಲಾಯಿತು.ಸರ್ವೋದಯ ದಿನವಾದ ಅಂದು

ಕಾರ್ಯಕ್ರಮವನ್ನು ಮಹಾತ್ಮ ಗಾಂಧಿಯವರಿಗೆ ಶ್ರದ್ಧಾಂಜಲಿ ಅರ್ಪಿಸುವ ಮೂಲಕ ಪ್ರಾರಂಭಿಸಲಾಯಿತು.ಅಕ್ಷಯಪಾತ್ರಾ ಫೌಂಡೇಷನ್ ನ ಶ್ರೀ ತಿರುಮಲ ರಾವ್ ಅವರು ಸ್ವಾಗತ ಬಯಸಿದರು.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ ನಾರಾಯಣ ಅವರು ಶಾಲೆಯ ವಿದ್ಯಾರ್ಥಿಗಳಿಗೆ ಸರ್ವೋದಯ ದಿನದ ಮಹತ್ವವನ್ನು ವಿವರಿಸಿ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿದರು. ಡಾ. ಪಿ.ವಿ ನಾರಾಯಣ ಅವರು ಸಾಂಕೇತಿಕವಾಗಿ ದಾನ ಮಾಡುವ ಪುಸ್ತಕಗಳ ಕೆಲವು ಪ್ರತಿಗಳನ್ನು ಅಕ್ಷಯಪಾತ್ರಾ ಫೌಂಡೇಷನ್ ನ ಜನರಲ್ ಮ್ಯಾನೇಜರ್ ಶ್ರೀ ವಿನಯ್ ಎನ್ ಕುಮಾರ್ ಅವರಿಗೆ ಹಸ್ತಾಂತರಗೊಳಿಸಿದರು. ಅಕ್ಷಯಪಾತ್ರಾ ಫೌಂಡೇಷನ್ ನ ಚಟುವಟಿಕೆಗಳನ್ನು ಶ್ರೀ ವಿನಯ್ ಎನ್ ಕುಮಾರ್ ಅವರು ವಿವರಿಸಿದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ರವೀಂದ್ರನಾಥ್ ಅವರು ವಂದನಾರ್ಪಣೆ ಮಾಡಿದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾದ ಶ್ರೀ ಡಿ.ನಂ. ವೆಂಕಟರಮಣಯ್ಯ ಅವರು ಉಪಸ್ಥಿತರಿದ್ದರು. ಶಾಲೆಯ ಮುಖ್ಯೋಪಾಧ್ಯಯಿನಿ, ಶಿಕ್ಷಕರು ಹಾಗೂ ವಿದ್ಯಾರ್ಥಿಗಳು ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.

**05–02–2016 ರಂದು ನಡೆದ 'ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ) ಕಾರ್ಯಕ್ರಮದಲ್ಲಿ "**ಹುಲಿಯ ಜಂಗುಳಿಯ ಮೊತ್ತ"– ಅರ್ಥ ವಿಶ್ಲೇಷಣೆ ಎಂಬ ವಿಷಯದ ಬಗ್ಗೆಯ ಚರ್ಚೆಗೆ ಚಾಲನೆಯನ್ನು ಡಾ.ಎನ್. ಆರ್. ಲಲಿತಾಂಬ, ಪ್ರಾಧ್ಯಾಪಕರು, ಸರ್ಕಾರಿ ಕಾಲೇಜು, ವಿಜಯನಗರ ಬೆಂಗಳೂರು ಅವರು ನೀಡಿ ಹಲವು ವಿವರಗಳನ್ನು ನೀಡಿದರು.



ಮಧ್ಯಕಾಲೀನ ಕರ್ನಾಟಕದ ಸಾಹಿತ್ಯ ಮತ್ತು ಶಾಸನಗಳಲ್ಲಿ, ಕ್ರಿ.ಶ. 1171 ರಿಂದ ಕ್ರಿ.ಶ. 1474ರವರೆಗೆ'ಹುಲಿಯ ಜಂಗುಳಿಯ ಮೊತ್ತ' ಎಂಬ ಪದಸಮೂಹದ ಒಂಬತ್ತು ಉಲ್ಲೇಖಗಳು ಕಂಡು ಬಂದಿದ್ದು ಅದರ ಅರ್ಥವನ್ನು ತಿಳಿದುಕೊಳ್ಳುವುದು ಮತ್ತು ಹುಲಿಯ ಜಂಗುಳಿಯ ಮೊತ್ತದ ವೀರರು ಮತ್ತು ಜಂಗುಳಿ ವೀರ ಮಾಹೇಶ್ವರರಿಗೆ ಸಂಬಂಧವಿರಬಹುದೇ ಎಂಬ ಚರ್ಚೆಗೆ ಡಾ. ಎನ್. ಆರ್.ಲಲಿತಾಂಬರವರು ಚಾಲನೆ ನೀಡಿದರು. ಈ ಮೂರೂ ಪದಗಳ ಮೇಲೆ ಷಷ್ಠಿ ವಿಭಕ್ತಿಪ್ರತ್ಯಯ ಇರುವುದರಿಂದ ಅವು ನಾಮಪದಗಳೆಂಬುದರಲ್ಲಿ ಸಂಶಯವಿಲ್ಲ. 'ಹುಲಿ'ಪದ ಇಲ್ಲಿ'ಹುಲಿಯಂತೆ ಪರಾಕ್ರಮಿಗಳಾದ' ವೀರರನ್ನು ಸೂಚಿಸುತ್ತಿದೆ.ಶಾಸನಗಳಲ್ಲಿ ಹುಲಿಗಾಹು, ಹುಲಿಯಮಾನಿ, ಇತ್ಯಾದಿ ಉಲ್ಲೇಖಗಳು ಕಂಡುಬರುತ್ತವೆ. 'ಹುಲಿಗಾಹು'ಎಂಬುದಕ್ಕೆ ಬಹಳ 'ಎಚ್ಚರವಾಗಿ ಮಾಡುವಪಹರೆ' ಎಂಬ ಅರ್ಥವಿದೆ.

'ಹುಲಿಯ ಜಂಗುಳಿಯ ಮೊತ್ತ' ಎಂಬ ಪದಸಮೂಹವು ಒಂದು ನಿರ್ದಿಷ್ಟವಾದ ತಂಡ ಒಂದರ ಹೆಸರಾಗಿ ಕಾಣಿಸಿಕೊಂಡಿರುವ ಹಿನ್ನೆಲೆಯಲ್ಲಿ ಆಲೋಚಿಸಿದಾದ ಈ ಹೆಸರು ಸೈನ್ಯ, ಹೋರಾಟಗಾರರು, ವೀರರ ತಂಡದ ನಾಯಕರ, ಅಧಿಕಾರಿಗಳ ಹೆಸರುಗಳೊಂದಿಗೇ ಮತ್ತೆ ಮತ್ತೆ ಕಾಣಿಸಿಕೊಂಡಿರುವುದು ಸ್ಪಷ್ಟವಾಗಿದೆ. ಇದಕ್ಕೆ ಶಿಸ್ತುಬದ್ಧವಾದಪರಾಕ್ರಮಿಗಳ 'ಸೈನ್ಯಪಡೆ' ಎಂಬ ಅರ್ಥವೇ ಈ ಸಂದರ್ಭಕ್ಕೆಹೊಂದುತ್ತದೆ.ಈ ಪದಸಮುಚ್ಚಯದ ಉಲ್ಲೇಖ ಹೊಯ್ಸಳ ಬಲ್ಲಾಳನ 1174ರ ಶಾಸನಕ್ಕಿಂತ ಹಿಂದೆ ಇಲ್ಲ. ಹುಲಿಯ ಜಂಗುಳಿ ವೀರರಾಗಿದ್ದ ಕೆಲವರು ವೀರಮಾಹೇಶ್ವರರಾಗಿ 13ನೇ ಶತಮಾನದ ಹೊತ್ತಿಗೆ ಕಂಡುಬಂದಿದ್ದಾರೆ.ಶಿವಪುರಗಳೆಂದು ಕರೆಯುವ ಕರ್ನಾಟಕದ ಊರುಗಳಲ್ಲಿ ವೀರಭದ್ರನ ಒಕ್ಕಲಲ್ಲಿ ವೀರಗಾಸೆ ಕಲೆಯಾಗಿ, ದೈವಾರಾಧನೆಯ ಭಾಗವಾಗಿದ್ದು, ಈ ಕುಣಿತದ ಅಭ್ಯಾಸ ಇವತ್ತಿಗೂಯಿದೆ.ಜಂಗುಳಿ ವೀರರು ವೀರಶೈವರೆಂಬುದರಲ್ಲಿ ಯಾವ ಅನುಮಾನವೂಯಿಲ್ಲ.

ಈ ಚರ್ಚೆ ದೀರ್ಘವಾದುದಾಗಿದ್ದು ಇಲ್ಲಿ ಅದನ್ನು ಬಹುವಾಗಿ ಸಂಕ್ಷೇಪಗೊಳಿಸಲಾಗಿದೆ.ಮುಂದೆ ನಡೆದ ಸ್ವಾರಸ್ಕರ ಚರ್ಚೆಯಲ್ಲಿ ಡಾ.ಕೆ.ಆರ್.ಗಣೇಶ, ಶ್ರೀ ಜಯರಾಮ ರೈ, ಶ್ರೀಮತಿ ನಳಿನಾ, ಡಾ। ನಳಿನೀ ವೆಂಕಟೇಶ್, ಡಾ। ಹರಿಹರ ಶ್ರೀನಿವಾಸರಾವ್, ಶ್ರೀ ಗುರುಪ್ರಸಾದ್, ಡಾ.ಜಯಮ್ಮ ಕರಿಯಣ್ಣ, ಪ್ರೊ. ಅಬ್ದುಲ್ ಬಶೀರ್, ಶ್ರೀ ಗುರುಪ್ರಸಾದ್, ಪ್ರೊ.ಆರ್.ಲಕ್ಷ್ಮಿನಾರಾಯಣ, ರಾಮಪ್ರಸಾದ್, ರವೀಂದ್ರನಾಥ್ ಮುಂತಾದವರು ಭಾಗವಹಿಸಿದ್ದರು.

ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ – ಸಾಕ್ಷ್ಯ ಚಿತ್ರಗಳ ಪ್ರದರ್ಶನದಲ್ಲಿ 8–2–2016ರಂದು ಹಳೆಗನ್ನಡ ಹಾಗೂ ನಡುಗನ್ನಡ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಈ ಸಾಕ್ಷ್ಯ ಚಿತ್ರಗಳು ಬಹಳ ಉಪಯುಕ್ತವಾಗಿದ್ದವು.

## ಶಾಶ್ವತ ನಿಧಿ

ಶಾಶ್ವತ ನಿಧಿಗೆ 2016 ರ 'ಫೆಬ್ರವರಿ ತಿಂಗಳಿಗಳಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:

ಡಾ.ಪಿ.ವಿ. ನಾರಾಯಣ, ಶ್ರೀ ಬಿ.ಎಸ್. ಗುರುಪ್ರಸಾದ್,ಶ್ರೀ ಡಿ.ನಂ. ವೆಂಕಟರಮಣಯ್ಯ, ಶ್ರೀ ವಿನಯ್ ಎನ್ ಕುಮಾರ್, ಶ್ರೀ ಕೇಶವಮೂರ್ತಿ, ಟಿ.ವಿ. ಶ್ರೀ ಶೇಷಾದ್ರಿ

ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 17.24 ಲಕ್ಷ

## 06–02–2016 ಕಾರ್ಯಕಾರಿ ಸಮಿತಿ ಸಭೆ

ದಿನಾಂಕ 06–02–2016 ರಂದು ನಡೆದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಈ ಕೆಳಕಂಡ ವಿಷಯಗಳ ಬಗ್ಗೆ ಚರ್ಚೆ ನಡೆದು ತೀರ್ಮಾನಗಳನ್ನು ಕೈಗೊಳ್ಳಲಾಯಿತು.

ಅಧ್ಯಕ್ಷ ಸ್ಥಾನಕ್ಕೆ ಡಾ. ಪಿ.ವಿ. ನಾರಾಯಣ ಅವರ ಪುನರಾಯ್ಕೆ, ಕರ್ನಾಟಕ ಸರ್ಕಾರದಿಂದ ದ ಮಂಜೂರಾದ ಅನುದಾನ, ಲಿಫ್ಟ್ ಅಳವಡಿಕೆ ಬಗ್ಗೆಯ ಪ್ರಗತಿ ಪರಿಶೀಲನೆ, ಲೋಚನಾ ವಿದ್ವತ್ ಪತ್ರಿಕೆಗೆ ಸಂಪಾದಕರಾಗಿ ಡಾ. ಹೆಚ್.ಎನ್. ಮುರಳೀಧರ ಅವರ ನೇಮಕ ಇತ್ಯಾದಿ ವಿಷಯಗಳು

## ಅಧ್ಯಕ್ಷ ಸ್ಥಾನಕ್ಕೆ ಡಾ. ಪಿ.ವಿ. ನಾರಾಯಣ ಅವರ ಪುನರಾಯ್ಕೆ



ದಿನಾಂಕ 06–02–2016 ರಂದು ನಡೆದ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ದಿನಾಂಕ 26–02–2016 ರಂದು ಅಧ್ಯಕ್ಷರ ಅವಧಿ ಮುಗಿಯಲಿರುವ ವಿಷಯದ ಬಗ್ಗೆ ಚರ್ಚೆ ನಡೆದು ಡಾ.ಪಿ.ವಿ.ನಾರಾಯಣ ಅವರೇ ಮುಂದಿನ ಅವಧಿಗೂ ಮುಂದುವರೆಯಬೇಕೆಂದು ಸಭೆಯು ಸರ್ವಾನುಮತದಿಂದ ಅವರನ್ನು ಕೋರಿತು. ಇದಕ್ಕೆ ಡಾ.ಪಿ.ವಿ.ನಾರಾಯಣ ಅವರು ಸಮ್ಮತಿ ಸೂಚಿಸಿದರು. ಡಾ. ಪಿ.ವಿ. ನಾರಾಯಣ ಅವರು 26–02–2019ರ ವರೆಗೆ ಬಿ.ಎಂ. ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾಗಿ ಮುಂದುವರೆಯುತ್ತಾರೆ. ಹೊಂಗನಸು ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಕ್ಕೆ ಕರ್ನಾಟಕ ಸರ್ಕಾರದಿಂದ ಅನುದಾನ ಬಿಡುಗಡೆ

ಕರ್ನಾಟಕ ಸರ್ಕಾರವು ವಾರ್ಷಿಕವಾಗಿ ಬಿಡುಗಡೆ ಮಾಡುವ ಅನುದಾನ ಹಂಚಿಕೆಯನ್ನು ಪ್ರಕಟಿಸಿದ್ದು, ಬಿ.ಎಂ.ಶ್ರೀ ಪ್ರತಿಷ್ಠಾನ ಕ್ಕೆ 2015–2016 ವರ್ಷದ ಚಟುವಟಿಕೆಗಳನ್ನು ನಡೆಸಲು ರೂ ಹತ್ತು ಲಕ್ಷ ಮೊತ್ತದ ಅನುದಾನವನ್ನು ಮಂಜೂರೂ ಮಾಡಿ ಬಿ.ಎಂ.ಶ್ರೀ ಪ್ರತಿಷ್ಠಾನ ದ ಖಾತೆಗೆ ಈ ಮೊತ್ತವನ್ನು ಜಮಾ ಮಾಡಿರುತ್ತದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಕರ್ನಾಟಕ ಸರ್ಕಾರಕ್ಕೆ ಧನ್ಯವಾದಗಳನ್ನು ಸಲ್ಲಿಸುತ್ತದೆ. 2015ರ ಜೂನ್ ತಿಂಗಳಿನಲ್ಲಿ ಕರ್ನಾಟಕ ಸರ್ಕಾರದ ಪ್ರಕಟನೆ ಮೇರೆಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಎಲ್ಲಾ ದಾಖಲೆಗಳ ಸಮೇತ ರೂ.68.80ಲಕ್ಷ ಮೊತ್ತದ ಯೋಜನೆಗಳನ್ನು ಅನುಷ್ಠಾನಗೊಳಿಸಲು ಅನುದಾನ ಕೋರಿ ಅರ್ಜಿಯನ್ನು ಸಲ್ಲಿಸಿತ್ತು.

ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರತಿಷ್ಠಿತ ವಿದ್ವತ್ ಪತ್ರಿಕೆ ಲೋಚನಾಗೆ **ಹೊಸ ಸಂಪಾದಕರು – ಡಾ.ಹೆಚ್. ಎನ್. ಮುರಳೀಧರ್**



ಕಿರು ಪರಿಚಯ

* ಪ್ರಾಧ್ಯಾಪಕರು, ಎ.ಪಿಎಸ್ ವಾಣಿಜ್ಯ ಕಾಲೇಜು.

* 24ಕ್ಕೂ ಹೆಚ್ಚು ಗ್ರಂಥಗಳ ರಚನೆ ಹಾಗೂ ಸಂಪಾದನೆ

* ಅಂಕಣಕಾರ

* ಹಲವು ಮಂಡಳಿಗಳಲ್ಲಿ ಸದ್ಯಸತ್ವ

* ಹಲವಾರು ಗೌರವಗಳಿಗೆ ಪಾತ್ರರಾಗಿದ್ದಾರೆ

ದಿನಾಂಕ 06–02–2016 ರಂದು ನಡೆದ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಈ ನೇಮಕಾತಿಯನ್ನು ಅನುಮೋದಿಸಲಾಯಿತು.

### ಪ್ರೊ.ಜಿ. ಅಬ್ದುಲ್ ಬಷೀರ್ ಅವರಿಗೆ ಮೆಚ್ಚುಗೆ

ಲೋಚನದ ಸಂಪಾದಕತ್ವದ ಜವಾಬ್ದಾರಿಯನ್ನು ಕಳೆದ ಏಳು ವರ್ಷಗಳ ಕಾಲ ಸತತವಾಗಿ ಸಮರ್ಥವಾಗಿ ನಿರ್ವಹಿಸಿದ ಪ್ರೊ.ಜಿ. ಅಬ್ದುಲ್ ಬಷೀರ್ ಅವರಿಗೆ ಸಂಸ್ಥೆ ಕೃತಜ್ಞತೆ ಸಲ್ಲಿಸುತ್ತದೆ ಎಂದು ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಪಿ.ವಿ.ನಾರಾಯಣ ಅವರು ಕಾರ್ಯಕಾರಿ ಸಮಿತಿಯಲ್ಲಿ ದಾಖಲಿಸಿದರು.ಹೊಂಗನಸು ಅವರಿಗೆಪ್ರೊ.ಜಿ. ಅಬ್ದುಲ್ ಬಷೀರ್ ಅಭಿನಂದನೆಗಳನ್ನು ಹಾಗೂ ಧನ್ಯವಾದಗಳನ್ನು ಸಲ್ಲಿಸುತ್ತದೆ.

**ಕೋರಿಕೆ**

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/– ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-
Date of Posting :29-02-2016

## 2016 ಫೆಬ್ರವರಿ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ.

ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ.

2016ರ ಫೆಬ್ರವರಿ ತಿಂಗಳಿನಲ್ಲಿ 24 ಗ್ರಂಥಗಳ ಶುಷ್ಕ ಶುದ್ಧೀಕರಣ, 12 ಗ್ರಂಥಗಳಿಗೆ ತೈಲ, 18 ಗ್ರಂಥಗಳಿಗೆ ಮಸಿ, 28 ಸೂಚಿಗಳು, 30 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ 20 ಗ್ರಂಥಗಳಿಗೆ ಅಟ್ಟೆಕಟ್ಟಿರುವುದು 5 ಗ್ರಂಥಗಳಿಗೆ ಬಟ್ಟೆ ಕಟ್ಟಿರುವುದು.

ಮೇಲ್ಕಂಡ ಕಾರ್ಯಗಳನ್ನು ಫೆಬ್ರವರಿ 2016ರಲ್ಲಿ ಕೈಗೊಳ್ಳಲಾಗಿದೆ.

**FORM IV**
**(See Rule-8)**

Statement about ownership and other particulars about Newspaper "HONGANASU Kannada Monthly" Bangalore. As required under Rules 8 of the Registration A Newspapers (Central) Rules 1956.

1. Place of Publication : Bangalore
2. Periodicity of publication : Monthly
3. Printer's Name : Sri. B.R. Ravindranath
   Whether Citizen of India : Yes
   Address : BMSree Smaraka Pratishtana, 3rd Main, NR Colony, Bangalore-560019
4. Publisher's Name : Sri. B.R. Ravindranath on behalf of the BMSree Smaraka Pratishtana, (Regd.)
   Whether Citizen of India: Yes
   Address : BMSree Smaraka Pratishtana, 3rd Main, NR Colony, Bangalore-560019
5. Editor's Name : Sri. B.R. Ravindranath
   Whether Citizen of India: Yes
   Address : BMSree Smaraka Pratishtana, 3rd Main, NR Colony, Bangalore-560019

I, B.R. Ravindranath here by Declare that the particulars given are true to the best of my knowledge and belief.

Bangalore  Sd/-
1st March, 2016  B.R. Ravindranath

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ**

ತೆರೆದ–ಅಂಚೆ

*ಶ್ರೀಮತಿ/ಶ್ರೀ*...........................................................................

.....................................................................................

.....................................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೪೮೭೭